## ಕರ್ನಾಟಕ ವಿಧಾನ ಪರಿಷತ್ತು

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** : 841 (980)
**ಸದಸ್ಯರ ಹೆಸರು** : ಶ್ರೀ ಶಶೀಲ್ ಜಿ. ನಮೋಶಿ (ಶಿಕ್ಷಕರ ಕ್ಷೇತ್ರ)
**ಉತ್ತರಿಸಬೇಕಾದ ದಿನಾಂಕ** : 20-09-2021
**ಉತ್ತರಿಸುವ ಸಚಿವರು** : ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಹಾಗೂ ಸಕಾಲ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ. | 6 ರಿಂದ 8ನೇ ತರಗತಿಯ ಪದವೀಧರ ಶಿಕ್ಷಕರ ನೇಮಕಾತಿಗಾಗಿ ರಚಿಸಲಾದ ವೃಂದ ಮತ್ತು ನೇಮಕಾತಿ ನಿಯಮ ತಿದ್ದುಪಡಿ/ಬದಲಾವಣೆ ಮಾಡುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; ಹಾಗಿದ್ದಲ್ಲಿ ಬದಲಾವಣೆ/ತಿದ್ದುಪಡಿ ಯಾವಾಗ ಮಾಡಲಾಗುವುದು; | ಹೌದು,<br><br>ಈಗಾಗಲೇ ದಿನಾಂಕ:01.01.2021 ರಂದು ಕರಡು ತಿದ್ದುಪಡಿಯನ್ನು ಹೊರಡಿಸಲಾಗಿದ್ದು. ಈ ಸಂಬಂಧ ಸ್ವೀಕರಿಸಲಾದ ಸಲಹೆ/ಆಕ್ಷೇಪಣೆಗಳನ್ನು ಪರಿಶೀಲಿಸಲಾಗಿದ್ದು, ಅಂತಿಮಗೊಳಿಸಲಾಗುವುದು. |
| ಆ. | 6 ರಿಂದ 8ನೇ ತರಗತಿಯ ಪದವೀಧರ ಶಿಕ್ಷಕರ ವೃಂದ ಮತ್ತು ನೇಮಕಾತಿ ನಿಯಮದಂತೆ ಅಭ್ಯರ್ಥಿಯು ಪದವಿಯಲ್ಲಿ ಪ್ರತಿ ವಿಷಯದಲ್ಲಿ ಸರಾಸರಿ ಕನಿಷ್ಠ ಶೇ.50 ರಷ್ಟು ಅಂಕಗಳನ್ನು ಪಡೆದಿರಬೇಕೆಂಬ ನಿಯಮದಿಂದ ಲಕ್ಷಾಂತರ ಅಭ್ಯರ್ಥಿಗಳು ಶಿಕ್ಷಕ ಹುದ್ದೆಗೆ ಅರ್ಜಿ ಸಲ್ಲಿಸುವ ಅವಕಾಶದಿಂದ ವಂಚಿತರಾಗುತ್ತಿರುವುದು ಸರ್ಕಾರದ ಗಮನಕ್ಕೆ ಇದೆಯೇ; ಹಾಗಿದ್ದಲ್ಲಿ ಅಭ್ಯರ್ಥಿಗಳಿಗೆ ಸದರಿ ನಿಯಮದಿಂದ ಆಗುತ್ತಿರುವ ಅನ್ಯಾಯವನ್ನು ಸರಿಪಡಿಸುವ ಯೋಚನೆ ಸರ್ಕಾರಕ್ಕೆ ಇದೆಯೇ; ಮುಂದಿನ ನೇಮಕಾತಿಯೊಳಗೆ ಸದರಿ ನಿಯಮಗಳನ್ನು ತಿದ್ದುಪಡಿ ಮಾಡಲಾಗುವುದು; | • ರಾಷ್ಟ್ರೀಯ ಶಿಕ್ಷಕರ ಶಿಕ್ಷಣ ಪರಿಷತ್‌ನ (NCTE), ದಿನಾಂಕ: 23-08-2010ರ ಅಧಿಸೂಚನೆಗಳನ್ವಯ 6 ರಿಂದ 8ನೇ ತರಗತಿಗಳಿಗೆ ನೇಮಿಸಬೇಕಾದ ಶಿಕ್ಷಕರ ವಿದ್ಯಾರ್ಹತೆಗಳನ್ನು B.A/B.Sc with atleast 50 Marks and One year Bachelor in Education (B.Ed) ಎಂಬುದಾಗಿದೆ.<br>• ಈ ಅಧಿಸೂಚನೆಯನ್ನು ಮಕ್ಕಳ ಉಚಿತ ಹಾಗೂ ಕಡ್ಡಾಯ ಶಿಕ್ಷಣ ಅಧಿನಿಯಮ 2009ರಂತೆ ಎಲ್ಲಾ ಪ್ರಾಥಮಿಕ ಶಾಲೆಗಳಲ್ಲಿ ಎನ್.ಸಿ.ಟಿ.ಇ ನಿಗಧಿಪಡಿಸಿದ ವಿದ್ಯಾರ್ಹತೆಗಳನ್ನು ನೇಮಕಾತಿಯಲ್ಲಿ ಕಡ್ಡಾಯವಾಗಿ ಪಾಲಿಸಬೇಕಾಗಿರುತ್ತದೆ.<br>• ಅದರನ್ವಯ 6 ರಿಂದ 8ನೇ ತರಗತಿಯ ಪದವೀಧರ ಶಿಕ್ಷಕರ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಕನಿಷ್ಠ ವಿದ್ಯಾರ್ಹತೆಯನ್ನು ಅಳವಡಿಸಿಕೊಳ್ಳಲಾಗಿದೆ. |
| ಇ. | 6 ರಿಂದ 8ನೇ ತರಗತಿಯ ಪದವೀಧರ ಶಿಕ್ಷಕರ ವೃಂದ ಮತ್ತು ನೇಮಕಾತಿ ನಿಯಮವನ್ನು ಪದವಿಯಲ್ಲಿ ಸರಾಸರಿ ಶೇ.50 ಅಂಕಗಳನ್ನು ಪಡೆಯಬೇಕೆಂದು ತಿದ್ದುಪಡಿ ಮಾಡಲು ಸರ್ಕಾರಕ್ಕೆ ಇರುವ ತೊಂದರೆಯೇನು? | ರಾಷ್ಟ್ರೀಯ ಶಿಕ್ಷಕರ ಶಿಕ್ಷಣ ಪರಿಷತ್ (NCTE) ನಿಯಮಾವಳಿಗಳನ್ವಯ ಸದರಿ ಮಾನದಂಡಗಳನ್ನು ಅನುಸರಿಸಲಾಗುತ್ತಿದೆ. |

**ಸಂಖ್ಯೆ**: ಇಪಿ 37 ಪಿಎಂಎ 2021

(ಬಿ.ಸಿ. ನಾಗೇಶ್)
ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ
ಹಾಗೂ ಸಕಾಲ ಸಚಿವರು